# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 652 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 14/12/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಐ.ಟಿ.ಐ. ಕಾಲೇಜುಗಳಲ್ಲಿ ಶಿಕ್ಷಕರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಕಾಲೇಜುವಾರು ಮಂಜೂರಾದ ಶಿಕ್ಷಕರ ಸಂಖ್ಯೆ, ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ, ಕೊರತೆಯಿರುವ ಶಿಕ್ಷಕರ ಸಂಖ್ಯೆ ಎಷ್ಟು; (ವಿವರ ನೀಡುವುದು) | ಮಂಜೂರಾದ ಶಿಕ್ಷಕರ ಸಂಖ್ಯೆ: 3048<br>ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ: 1431<br>ಕೊರತೆಯಿರುವ ಶಿಕ್ಷಕರ ಸಂಖ್ಯೆ: 1617<br>ವಿವರಗಳನ್ನು ಅನುಬಂಧ-1 ರಲ್ಲಿ ನಮೂದಿಸಲಾಗಿದೆ. |
| ಇ) | ರಾಜ್ಯದ ಎಷ್ಟು ಐ.ಟಿ.ಐ. ಕಾಲೇಜುಗಳಿಗೆ ಪ್ರಭಾರಿ ಪ್ರಾಂಶುಪಾಲರನ್ನು ನೇಮಿಸಲಾಗಿದೆ; ಇದರಿಂದ ಆಡಳಿತಾತ್ಮಕ ತೊಂದರೆ ಆಗುವುದಿಲ್ಲವೇ; ಸರಿಪಡಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ; | ರಾಜ್ಯದ 95 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಪ್ರಭಾರೆ ಪ್ರಾಚಾರ್ಯರನ್ನು ನೇಮಿಸಲಾಗಿದೆ. ಇದರಿಂದ ಆಡಳಿತಾತ್ಮಕ ತೊಂದರೆ ಆಗಿರುವುದಿಲ್ಲ.<br>ಪ್ರಾಚಾರ್ಯರು ದರ್ಜೆ-2 ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. |
| ಈ) | ಐ.ಟಿ.ಐ ಕಾಲೇಜುಗಳಲ್ಲಿ ಕೊರತೆ ಇರುವ ಶಿಕ್ಷಕರು ಮತ್ತು ಇತರೆ ಸಿಬ್ಬಂದಿಗಳ ನೇಮಕಾತಿಗಾಗಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಇಲಾಖೆಯ ತರಬೇತಿ ವಿಭಾಗದಲ್ಲಿ ಖಾಲಿ ಇರುವ 1520 ಕಿರಿಯ ತರಬೇತಿ ಅಧಿಕಾರಿಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಅಭ್ಯರ್ಥಿಗಳ ಪರಿಶೀಲನಾ ಕಾರ್ಯ ಪೂರ್ಣಗೊಂಡಿದ್ದು, ಆಯ್ಕೆ ಪಟ್ಟಿಯನ್ನು ನಿರೀಕ್ಷಿಸಲಾಗಿದೆ. ಆಯ್ಕೆ ಪಟ್ಟಿ ಸ್ವೀಕೃತಗೊಂಡ ತಕ್ಷಣ ನೇಮಕಾತಿ ಆದೇಶ ಹೊರಡಿಸಲು ಕ್ರಮಕೈಗೊಳ್ಳಲಾಗುವುದು.<br><br>ಮುಂದುವರೆದು, ಕರ್ನಾಟಕ ಲೋಕಸೇವಾ ಆಯೋಗದಿಂದ 26 ಪ್ರಥಮ ದರ್ಜೆ ಸಹಾಯಕರ ಆಯ್ಕೆ ಪಟ್ಟಿ ಸ್ವೀಕೃತಗೊಂಡಿದ್ದು, ಸದರಿ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಪ್ರಕ್ರಿಯೆ ಪರಿಶೀಲನೆಯಲ್ಲಿದೆ. |

**ಸಂಖ್ಯೆ: ಕೌಉಜೀಇ 72 ಕೈತಪ್ರ 2020**

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು